



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 38

ಸಂಪುಟ: ೦೪ ಸಂಚಿಕೆ: ೧೨ | ಫೆಬ್ರವರಿ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 04 Issue 12 | March 2018 | Pages - 8 | A. Sub. - Rs. 20/- | Editor : Sri. B.R. Ravindranath





ಚಂದಾ ವಿವರಗಳು
ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ
ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ


# ಗಮಕವಾಹಿನಿ ಸಮಾರೋಪ ಕಾರ್ಯಕ್ರಮ

ಗಮಕವಾಹಿನಿ–ಮಾಲೆ –೨೫, ಪಂಪಭಾರತ ಸಂಚಿಕೆ –೧೨
ವಾಚನ: ಶ್ರೀ ಅಭಿರಾಮ್ ಭರತವಂಶಿ
ವ್ಯಾಖ್ಯಾನ : ಕರ್ನಾಟಕ ಕಲಾಶ್ರೀ ತೆಕ್ಕೆಕೆರೆ ಸುಬ್ರಹ್ಮಣ್ಯಭಟ್ಟ
ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ ಗಮಕ ಕಲಾ ಪ್ರತಿಷ್ಠಾನ

'ಗಮಕ' ಅತ್ಯಂತ ಪ್ರಾಚೀನವಾದ ಕಲೆ. ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಈಕೆಯನ್ನು ಪುನರುಜ್ಜೀವನಗೊಳಿಸುವ ಮತ್ತು ಪುನಶ್ಚೇತನಗೊಳಿಸುವ ಸಲುವಾಗಿ ಕಳೆದ ಎಂಟು ವರ್ಷಗಳಿಂದಲೂ ಶ್ರಮಿಸುತ್ತಿದೆ. ಪ್ರತಿಷ್ಠಾನವು ಯುವ ಜನರಲ್ಲಿ ಆಸಕ್ತಿ ಮೂಡಿಸುವ ಸಲುವಾಗಿ, ಮಾಧ್ಯಮಿಕ ಶಾಲಾ ಪ್ರೌಢಶಾಲಾ ಮತ್ತು ಕಾಲೇಜು ವಿದ್ಯಾರ್ಥಿಗಳನ್ನು ಈ ಕಲೆಯಲ್ಲಿ ತೊಡಗಿಸಿಕೊಳ್ಳುವುದಕ್ಕಾಗಿ ಎಲ್ಲಾ ರೀತಿಯ ಪ್ರಸಾರ ಯೋಜನೆಯನ್ನು ನಡೆಸಿಕೊಂಡು ಬರುತ್ತಿದೆ. ಈ ನಿಟ್ಟಿನಲ್ಲಿ ಬಿಎಂಶ್ರೀ ಪ್ರತಿಷ್ಠಾನವು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಯೋಜನೆಗಳನ್ನು ಗಮನಿಸಿ ಕಳೆದ ೨೫ ತಿಂಗಳಿನಿಂದಲೂ ಗಮಕಿಗಳಿಗೆ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಪ್ರತಿಷ್ಠಾನದ ವೇದಿಕೆಯನ್ನು ನೀಡಿ 'ಗಮಕವಾಹಿನಿ'ಎಂಬ ಕಾರ್ಯಕ್ರಮದಡಿ ಕಾರ್ಯಕ್ರಮಗಳನ್ನು ಆಯೋಜಿಸಲು ಅವಕಾಶ ನೀಡಿತ್ತು. ಮೊದಲ ೧೨ ಕಂತುಗಳಲ್ಲಿ ಕುಮಾರವ್ಯಾಸ ಭಾರತದ ಮತ್ತು ಇತರ ಕೆಲವು ಷಟ್ಪದಿ ಕಾವ್ಯಗಳ ಕೆಲವು ಪ್ರಸಂಗಗಳನ್ನು ಕಿರಿಯ ಕಲಾವಿದರುಗಳು ಬಹಳ ಯಶಸ್ವಿಯಾಗಿ ನಡೆಸಿಕೊಟ್ಟದ್ದನ್ನು ಇಲ್ಲಿ ಸ್ಮರಿಸಬೇಕು. ಪಂಪ ಭಾರತದ ಕೆಲವು ಪ್ರಸಂಗಗಳನ್ನು ಕಳೆದ ಮಾರ್ಚಿ ತಿಂಗಳಿನಿಂದ ಆರಂಭಮಾಡಿ, ಇಂದು ಕರ್ಣನ ಅವಸಾನದ ಭಾಗದೊಂದಿಗೆ ಈ ಪಂಪ ಭಾರತದ ಸಂಚಿಕೆ ಮುಕ್ತಾಯವಾಯಿತು. ಕಾರ್ಯಕ್ರಮದ ಆರಂಭದಲ್ಲಿ ಡಾ॥ಪಿ.ವಿ. ನಾರಾಯಣ ಅವರು ಪ್ರತಿಷ್ಠಾನದೊಂದಿಗೆ ಕೈಜೋಡಿಸಿದ ಗಮಕಕಲಾ ಪ್ರತಿಷ್ಠಾನದ ಧ್ಯೇಯೋದ್ದೇಶಗಳನ್ನು ಸಭೆಗೆ ತಿಳಿಸಿ, ಅವರ ಆಶಯಗಳಿಗೆ ಸಕರಾತ್ಮಕವಾಗಿ ಸ್ಪಂದಿಸುವ ತವಕವನ್ನು ವ್ಯಕ್ತಪಡಿಸಿದ ಫಲವಾಗಿ, ನಿರಂತರವಾಗಿ ನಡೆದುಕೊಂಡು ಬಂದ ಗಮಕವಾಹಿನಿ ಕಾರ್ಯಕ್ರಮದ ಬಗ್ಗೆ ಮತ್ತು ಅದರ ಯಶಸ್ಸಿಗೆ ೨ನೇ ಪುಟಕ್ಕೆ



# ಸಂಪಾದಕೀಯ

ಫೆಬ್ರವರಿ 16ರಂದು ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪುಬಹುತೇಕವಾಗಿ ಕರ್ನಾಟಕದ ಜನತೆಗೆ ಸಮಾಧಾನ ತಂದಿದೆ. ಈ ಹಿಂದಿನ ಅನುಭವದಂತೆ ನಮ್ಮ ರಾಜ್ಯದ ಹಿತದೃಷ್ಟಿಗೆ ವಿರುದ್ಧವಾಗಿತೀರ್ಪು ಬಂದಿದ್ದಲ್ಲಿ ನಮಗೆ ಹಲವಾರು ರೀತಿಯ ನಷ್ಟಗಳು ಸಂಭವಿಸುತ್ತಿದ್ದವು. ಮುಖ್ಯವಾಗಿ ಸಾರ್ವಜನಿಕ ಆಸ್ತಿಗಳಿಗೆ ಹಾನಿಯಾಗುತ್ತಿತ್ತು ಹಾಗೂ ಬಂದ್ ಆಚರಣೆ ಇತ್ಯಾದಿಗಳ ಕಾರಣಗಳಿಂದ ರಾಜ್ಯದ ಉತ್ಪಾದಕತೆ ಕುಂಠಿತಗೊಳ್ಳುತ್ತಿತ್ತು. ನಮ್ಮ ರಾಜ್ಯದ ಪರವಾಗಿ ಶ್ರಮಿಸಿದ ಎಲ್ಲರಿಗೂ ನಮ್ಮ ನಮನಗಳು.

ಈ ಹಿಂದೆ ಸುಮಾರು ಎರಡು ವರ್ಷಗಳ ಕಾಲ ಕರ್ನಾಟಕ ಸಾಂಸ್ಕೃತಿಕ ದರ್ಶನ ಮಾಲೆಯಡಿಯಲ್ಲಿ ನಾವು ಪ್ರತಿ ತಿಂಗಳೂ ನಮ್ಮ ನಾಡಿನ ಬಗ್ಗೆಯ ಸಾಕ್ಷ್ಯಚಿತ್ರಗಳನ್ನು ಪ್ರದರ್ಶಿಸುತ್ತಿದ್ದೆವು. ಮಾರ್ಚಿ2018ರಿಂದ ಪ್ರತಿ ತಿಂಗಳೂ ಭಾರತದ ಪ್ರಖ್ಯಾತ ಸಾಹಿತಿಗಳ ಬಗ್ಗೆಯ ಕಿರುಚಿತ್ರಗಳನ್ನು 'ಸಾಹಿತ್ಯ ವಿಹಾರ' ಮಾಲೆಯಡಿಯಲ್ಲಿ ಪ್ರದರ್ಶಿಸಲು ಪ್ರಾರಂಭಿಸುತ್ತಿದ್ದೇವೆ.

ಎಂದಿನಂತೆ ನೀವೆಲ್ಲರೂ ಸಹಕಾರ ನೀಡುವಿರೆಂದು ನಂಬಿದ್ದೇವೆ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

## ಮಾರ್ಚ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮುಳಿಯ ತಿಮ್ಮಪ್ಪಯ್ಯ | ೩-೩-೧೮೮೮ |
| ಪಿ.ಲಂಕೇಶ | ೮-೩-೧೯೩೫ |
| ಡಿವಿಜಿ | ೧೭-೩-೧೮೮೭ |
| ಪುತಿನ | ೧೭-೩-೧೯೦೫ |
| ಎಂ.ಗೋವಿಂದಪೈ | ೨೩-೩-೧೮೮೩ |

## ಮಾರ್ಚ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿಂಪಿ ಲಿಂಗಣ್ಣ | ೫-೩-೧೯೯೩ |
| ಜಿ ಪಿ ರಾಜರತ್ನಂ | ೧೩-೩-೧೯೭೯ |
| ಯಶವಂತ ಚಿತ್ತಾಲ | ೨೨-೩-೨೦೧೪ |
| ಶಾಂತಿನಾಥ ದೇಸಾಯಿ | ೨೬-೩-೧೯೯೮ |

**ಒಂದನೇ ಪುಟದಿಂದ**

ಕಾರಣಕರ್ತರಾದ ಎಲ್ಲರನ್ನೂ ನೆನಪಿಸಿಕೊಂಡು ಕೃತಜ್ಞತೆ ಸಲ್ಲಿಸಿ ಕಾರ್ಯಕ್ರಮಕ್ಕೆ ಸ್ವಾಗತಿಸಿದರು.

ಈ ದಿನದ ಪಂಪಭಾರತ ಸಂಚಿಕೆ ೧೨ (ಕರ್ಣನ ಅವಸಾನದ ಸಂಗ್ರಹ ಭಾಗ) ಅನ್ನು ಸುಶ್ರಾವ್ಯವಾಗಿ ವಾಚನ ಮಾಡಿದ ಯುವ ಉದಯೋನ್ಮುಕ ಗಮಕಿ ಶ್ರೀ ಅಭಿರಾಮ್ ಭರತ್‌ವಂಶಿ ಅವರು ಸಭಿಕರ ಪ್ರಶಂಸೆಗೆ ಪಾತ್ರರಾದರು.

ಹಿರಿಯ ಗಮಕಿ ಮತ್ತು ವಾಖ್ಯಾನಕಾರರಾದ ಕರ್ನಾಟಕ ಕಲಾಶ್ರೀ ಶ್ರೀ ತೆಕ್ಕೆಕೆರೆ ಸುಬ್ರಹ್ಮಣ್ಯಭಟ್ ಅವರ ವ್ಯಾಖ್ಯಾನ ಬಹಳ ಅದ್ಭುತವಾಗಿ ಮೂಡಿ ಬಂದಿತು. ಪ್ರೊ.ಜಿ.ಅಶ್ವತ್ಥನಾರಾಯಣ, ಹಿರಿಯ ವಿದ್ವಾಂಸರು ಮತ್ತು ಶ್ರೀ ಎಂ.ಆರ್.ಸತ್ಯನಾರಾಯಣ, ಮಾಜಿ ಅಧ್ಯಕ್ಷರು ಗಮಕ ಪರಿಷತ್ತು ಇವರುಗಳ ಘನ ಉಪಸ್ಥಿತಿಯಲ್ಲಿ ಕಾರ್ಯಕ್ರಮ ಜರುಗಿತು.ಹಿಂದಿನ ಸಂಚಿಕೆಗಳಲ್ಲಿ ಭಾಗವಹಿಸಿದ್ದ ಯುವ ಗಮಕಿಗಳು ಮತ್ತು ಪೋಷಕರು ಈ ದಿನದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದುದು ವಿಶೇಷವಾಗಿತ್ತು.

೨೫ ಸಂಚಿಕೆಗಳನ್ನು ರೂಪಿಸಿ, ಕಾರ್ಯಕ್ರಮದ ಯಶಸ್ಸಿಗೆ ಕಾರಣಕರ್ತರಾದ ಗಮಕ ಕಲಾಪ್ರತಿಷ್ಠಾನದ ಕಾರ್ಯದರ್ಶಿ ಶ್ರೀಮತಿ ಸಿ.ವಿ.ಶ್ರೀಮತಿ, ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

# ಪ್ರಕಟಣೆಗಳು

ತಾಳೆಗರಿ/ ಓಲೆಗರಿ, ಕಾಗದದ ಮೇಲೆ ಬರೆದ ಪ್ರಾಚೀನ ಹಸ್ತಪ್ರತಿಗಳು, ಕಡತಗಳು ದೇಶದ ಅಮೂಲ್ಯವಾದ ಅಸ್ತಿ ಮತ್ತು ಸಂಪತ್ತು. ಭಾರತ ಸರ್ಕಾರವು ಅವುಗಳನ್ನು ಉಳಿಸಿಕೊಳ್ಳುವ ಮಹತ್ತರ ಕಾರ್ಯವನ್ನು ಕೈಗೊಂಡಿದೆ. (National Mission for Manuscripts, New Delhi) ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಬಿ.ಎಂ.ಶ್ರೀ.ಪ್ರತಿಷ್ಠಾನವು ಸಂರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಾ ಬರುತ್ತಿದೆ. ಇಂತಹ ಮೌಲಿಕ ದಾಖಲೆಗಳು ನಾಶವಾಗುವುದನ್ನು ತಪ್ಪಿಸಲು, ಬಿ.ಎಂ.ಶ್ರೀ ಪ್ರತಿಷ್ಠಾನವು ಸಾರ್ವಜನಿಕರು, ಮಠಮಾನ್ಯಗಳು, ಗುರುಕುಲಗಳು, ಅರಮನೆ, ಗುರುಮನೆಗಳು, ವಿದ್ಯಾಸಂಸ್ಥೆಗಳು ಹೊಂದಿರಬಹುದಾದ ತಾಳೆಗರಿ ಗ್ರಂಥಗಳ ಮತ್ತು ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಅರಿವನ್ನು ಮೂಡಿಸುತ್ತದೆ.(Preventive maintenance). ಸಂರಕ್ಷಣಾ ಸೇವೆ ಹಾಗೂ ಗ್ರಂಥಸೂಚಿ ತಯಾರಿಕೆ ಸೇವೆಗಳನ್ನೂ ನೀಡಲಾಗುವುದು. ಆಸಕ್ತರು ಈ ಸೇವೆಯ ಸದುಪಯೋಗ ಪಡೆಯಲು ಸಂಪರ್ಕಿಸಿ:

ಶ್ರೀ ಬಿ.ಎಸ್. ಗುರುಪ್ರಸಾದ್, ಸಂಯೋಜಕರು, ಹಸ್ತಪ್ರತಿ ವಿಭಾಗ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, 3ನೇ ಮೇನ್, ನರಸಿಂಹರಾಜ ಕಾಲೊನಿ,
ಬಸವನಗುಡಿ, ಬೆಂಗಳೂರು –560019. ಕಛೇರಿ ಸಮಯ: ಮಧ್ಯಾಹ್ನ 12–30ರಿಂದ ಸಂಜೆ 7–00ಗಂಟೆ. ವಾರದ ರಜೆ: ಮಂಗಳವಾರ
ದೂರವಾಣಿ :080–26615877, ಮೊಬೈಲ್–9535097337

* * *

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ. ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

* * *

## ಕನ್ನಡ ಹಳಗನ್ನಡ ತರಗತಿಗಳ ಧ್ವನಿಮುದ್ರಿಕೆಗಳು ಲಭ್ಯ

ಈಗ ನಡೆಸಲಾಗುತ್ತಿರುವ 6 ತಿಂಗಳ ಹಳಗನ್ನಡ ಡಿಪ್ಲೋಮೊ ತರಗತಿಗಳಲ್ಲಿ ವಿದ್ವಾಂಸರು ನೀಡುವ ಉಪನ್ಯಾಸಗಳ ಧ್ವನಿಮುದ್ರಿಕೆಗಳು ಈ ತರಗತಿಗಳ ವಿದ್ಯಾರ್ಥಿಗಳಿಗೆ ಲಭ್ಯಗೊಳಿಸುವ ಸೌಲಭ್ಯವನ್ನು ಪ್ರತಿಷ್ಠಾನವು ಒದಗಿಸುತ್ತಿದೆ. ತರಗತಿಗಳಿಗೆ ಹಾಜರಾಗದ ವಿದ್ಯಾರ್ಥಿಗಳು ಹಾಗೂ ಉಪನ್ಯಾಸಗಳನ್ನು ಮತ್ತೊಮ್ಮೆ ಮನನ ಮಾಡಿಕೊಳ್ಳುವ ಆಸಕ್ತಿ ಇರುವ ವಿದ್ಯಾರ್ಥಿಗಳ ಬಳಕೆಗಾಗಿ ಪ್ರತಿಷ್ಠಾನವು ಈ ಸೌಲಭ್ಯವನ್ನು ನೀಡಲಾಗುತ್ತಿದೆ. ಈ ಸೌಲಭ್ಯವನ್ನು ಉಚಿತವಾಗಿ ನೀಡಲಾಗುತ್ತಿದೆ.

* * *

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿಗಾಗಿ ವಿಮರ್ಶಾಕೃತಿಗಳನ್ನು ಆಹ್ವಾನಿಸಿದೆ. ಹತ್ತು ಸಾವಿರ ರೂಪಾಯಿ ನಗದು ಹಾಗೂ ಅಭಿನಂದನಾ ಪತ್ರವನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು 2017ನೆಯ ಸಾಲಿನಲ್ಲಿ (ಜನವರಿ–ಡಿಸೆಂಬರ್ ಅವಧಿ) ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾಕೃತಿಯೊಂದಕ್ಕೆ ನೀಡಲಾಗುವುದು. ಆಸಕ್ತರು 2017ರಲ್ಲಿ ಪ್ರಕಟವಾಗಿರುವ ಕನ್ನಡ ವಿಮರ್ಶಾಕೃತಿಯ ಎರಡು ಪ್ರತಿಗಳ ಜೊತೆ ಖಾಲಿ ಹಾಳೆಯಲ್ಲಿ ವಿಳಾಸ ಮತ್ತು ಮೊಬೈಲ್ ನಂ. ನಮೂದಿಸಿ ಸಲ್ಲಿಸಬೇಕು. ಕೃತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ದಿನಾಂಕ : 15–3–2018 ರ ಒಳಗೆ ಕಳುಹಿಸಬೇಕು.

# ಮಾರ್ಚ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### ೦೯-೦೩-೨೦೧೮ ಶುಕ್ರವಾರ ಸಂಜೆ- ೬-೦೦ ಗಂಟೆಗೆ

ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ- ಸಂಗೀತ

ಗಾಯನ : ಶ್ರೀಮತಿ ಇಂದುಮತಿ ಆರ್.ಕುಮಾರ್.

### ೧೧-೦೩-೨೦೧೮ ಭಾನುವಾರ ಸಂಜೆ ೩-೦೦ಗಂಟೆಗೆ

ಮೈಸೂರಿನ 'ಪರಂಪರೆ' ಸಂಸ್ಥೆಯ ಸಹಯೋಗ

ಗಮಕ ವಾಚನ : ವಿದುಷಿ ಸತ್ಯಲಕ್ಷ್ಮಿ

ವ್ಯಾಖ್ಯಾನ : ಡಾ. ಜ್ಯೋತಿ ಶಂಕರ್

ವಿಷಯ : ವಜ್ರಜಂಘಭವ ವೃತ್ತಾಂತ.



### ೧೨-೦೩-೨೦೧೮ ಸೋಮವಾರ ಸಂಜೆ ೬ -೦೦ಗಂಟೆಗೆ

ಶಂಬಾಜೋಷಿ, ಉಪ್ಪಂಗಳ ರಾಮಭಟ್ಟ ದತ್ತಿ ಕಾರ್ಯಕ್ರಮ

ಜಗದೀಶ ಚಂದ್ರಬೋಸ್ ಕುರಿತ ಸಾಕ್ಷ್ಯಚಿತ್ರ ಪ್ರದರ್ಶನ ಮತ್ತು ಭಾಷಣ

ಭಾಷಣಕಾರರು : ಶ್ರೀಮತಿ ಚೂಡಿ ಶಿವರಾಂ

(ಖ್ಯಾತ ಪತ್ರಕರ್ತರು, ಲೇಖಕರು)

### ೨೧-೦೩-೨೦೧೮ ಬುಧವಾರ ಸಂಜೆ ೬-೦೦ ಗಂಟೆಗೆ

ಸಾಕ್ಷ್ಯಚಿತ್ರ ಪ್ರದರ್ಶನ- 'ಸಾಹಿತ್ಯ ವಿಹಾರ'



### ೨೮-೦೩-೨೦೧೮ ಬುಧವಾರ ಸಂಜೆ ೬-೦೦ಗಂಟೆಗೆ

"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : 'ಕನ್ನಡ ವಂಶ' ಒಂದು ಚಿಂತನೆ

ಚಾಲನೆ ನೀಡುವವರು : ಪ್ರೊ|| ಜಿ.ಕೆ. ದೇವರಾಜ ಸ್ವಾಮಿ

### ಕಿರು ಪರಿಚಯ

**ಶ್ರೀಮತಿ ಸಿ.ವಿ.ಶ್ರೀಮತಿ :**

ನಾಡಿನ ಪ್ರಖ್ಯಾತ ಗಮಕಿ ಶ್ರೀ ಹೆಚ್.ಆರ್‌ಕೇಶವಮೂರ್ತಿಯವರ ಆಪ್ತಶಿಷ್ಯೆಯಾಗಿರುವ ಸಿ.ವಿ. ಶ್ರೀಮತಿ ಸಂಸ್ಕೃತ ಸ್ನಾತಕೋತ್ತರ ಪದವೀಧರೆ. ನಾಡಿನ ಅನೇಕ ಜಿಲ್ಲಾ-ತಾಲೂಕು ಕೇಂದ್ರಗಳಲ್ಲಿ ಅನೇಕ ಗಮಕ ಕಾರ್ಯಕ್ರಮಗಳನ್ನು, ತರಬೇತಿ ಶಿಬಿರಗಳನ್ನು ಏರ್ಪಡಿಸುವ ಮೂಲಕ ಹಿರಿಯ-ಕಿರಿಯ ಕಲಾವಿದರನ್ನು ಕಲಾಸೇವೆಯಲ್ಲಿ ತೊಡಗಿಸುತ್ತ ಕಲೆಯ ಪ್ರಚಾರ-ಕ್ಕೆ ಶ್ರಮಿಸುತ್ತಿರುವ ಒಬ್ಬ ಸಮರ್ಥ, ನಿಸ್ವಾರ್ಥ ಸಂಘಟನಾಕಾರ್ತಿ. ಗಮಕ ಕಲೆಯ ಉಳಿವು, ಏಳಿಗೆ, ಯುವ ಪೀಳಿಗೆಗೆ ಕಲೆಯ ಪರಿಚಯ, ಕಲಾಸಕ್ತಿ, ಅಭಿರುಚಿಯ ಪ್ರೇರಣೆ ಮುಂತಾದ ಮಹೋದ್ದೇಶದಿಂದ ಶ್ರೀ ವಾಗ್ದೇವಿ ಗಮಕಕಲಾ ಪ್ರತಿಷ್ಠಾನ ಎಂಬ ಸಂಸ್ಥೆಯನ್ನು ಸ್ಥಾಪಿಸಿ ನಿರಂತರವಾಗಿ ಹಿರಿಯ-ಕಿರಿಯ, ಉದಯೋನ್ಮುಖ ಕಿಶೋರ-ಯುವ ಕಲಾಕುಸುಮಗಳಿಂದ ನಗರ/ನಗರೇತರ ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ ವೇದಿಕೆಗಳಲ್ಲಿ, ಟಿವಿ-ಆಕಾಶವಾಣಿ ಕೇಂದ್ರಗಳಲ್ಲಿ ಕಾರ್ಯಕ್ರಮಗಳನ್ನು ನೀಡುತ್ತ ಸಾರ್ವಜನಿಕರ-ಕಲಾಭಿಮಾನಿಗಳ ಮೆಚ್ಚುಗೆಗೆ, ಮನ್ನಣೆಗೆ ಪಾತ್ರವಾಗಿದ್ದಾರೆ. ಹಳೆಗನ್ನಡದ ಬಹುತೇಕ ಎಲ್ಲಾ ಛಂಧೋಬಂಧದ ಕಾವ್ಯಗಳನ್ನು ಅಭ್ಯಾಸವನ್ನು ಶ್ರೀಮತಿ ಅವರು ಮಾಡಿರುತ್ತಾರೆ.

ಕಳೆದ ೨ ವರ್ಷಗಳಿಂದ ಬಿಎಂಶ್ರೀ ಪ್ರತಿಷ್ಠಾನದ ಸಭಾಂಗಣದಲ್ಲಿ ಹಿರಿಯ-ಕಿರಿಯ, ಯುವ ನುರಿತ, ಉದಯೋನ್ಮುಖ ಕಲಾವಿದರಿಂದ ಗಮಕ ವಾಚನ-ವ್ಯಾಖ್ಯಾನಮಾಲಿಕೆ, ಗಮಕ ರೂಪಕಗಳನ್ನು ಸಿದ್ಧಪಡಿಸಿ ಸಂಸ್ಥೆಯ ಸಹಯೋಗದೊಂದಿಗೆ ಕಾರ್ಯಕ್ರಮ ನೀಡುವಲ್ಲಿ ಅವರ ಪರಿಶ್ರಮ ಶ್ಲಾಘನೀಯ, ಅನುಕರಣೀಯ.

**ಶ್ರೀ ತಕ್ಕೆಕೆರೆ ಸುಬ್ರಮಣ್ಯ ಭಟ್ಟ್:**

ಶ್ರೀಯುತರು ಟೆಲಿಪೋನ್ ಇಲಾಖೆಯ ಉದ್ಯೋಗಿಯಾಗಿ ನಿವೃತ್ತಿ ಹೊಂದಿರುತ್ತಾರೆ. ವೃತ್ತಿಯ ಜೊತೆಜೊತೆಯಲ್ಲೆ ಗಮಕ ವಾಚನ-ವ್ಯಾಖ್ಯಾನವನ್ನು ಹವ್ಯಾಸವಾಗಿ ಬೆಳೆಸಿಕೊಂಡು ಅನೇಕ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿದ್ದಾರೆ. ಅವರು ಕರ್ನಾಟಕ ಗಮಕ ಕಲಾಪರಿಷತ್ತಿನ ಗೌರವಉಪಾಧ್ಯಕ್ಷರಾಗಿ, ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿದ್ದಾರೆ.

**ಕುಮಾರ ಅಭಿರಾಂ ಭರತವಂಶಿ :**

ಕಲಾಕುಟುಂಬದ ಪರಿಸರದಲ್ಲಿ ಬೆಳೆದು ಬಂದ ಕುಮಾರ ಅಭಿರಾಂ ಭರತವಂಶಿ ನಗರದ ದಯಾನಂದ ಕಾಲೇಜಿನಲ್ಲಿ ಅಂತಿಮ ಬಿ.ಇ. ಪದವಿಯ ವಿದ್ಯಾರ್ಥಿ ಹಾಗೂ ಪ್ರಸಿದ್ಧ ಸಂಗೀತ ವಿದ್ವಾಂಸರಾದ ಶ್ರೀ ಆರ್.ಕೆ. ಪದ್ಮನಾಭ ಅವರ ವಿದ್ಯಾರ್ಥಿಯಾಗಿ ಸಂಗೀತದಲ್ಲಿ ವಿದ್ವತ್ ಪಡೆದಿದ್ದು ಭರತನಾಟ್ಯ, ವೀಣಾ ವಾದನವನ್ನು ಅಭ್ಯಾಸ ಮಾಡಿರುತ್ತಾರೆ. ಅವರ ಶ್ರದ್ಧಾ-ನಿಷ್ಠೆಯ ಕಲಿಕಾಸಕ್ತಿ ಅವರನ್ನು ಒಬ್ಬ ಒಳ್ಳೆಯ ಸಮರ್ಥಕಲಾವಿದನಾಗಿ ರೂಪುಗೊಳ್ಳಲು ಸಹಕಾರಿಯಾಗಿದೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

೨೧-೧-೨೦೧೮

**ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ ಕಾರ್ಯಕ್ರಮ**

ಗಮಕವಾಚನ : ಶ್ರೀ ಎಂ.ಆರ್. ಸತ್ಯನಾರಾಯಣ

ವ್ಯಾಖ್ಯಾನ: ಪ್ರೊಫೆಸರ್ ಕೆ. ಇ. ರಾಧಾಕೃಷ್ಣ




ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ ಕಾರ್ಯಕ್ರಮದಡಿಯಲ್ಲಿ ನಾಡಿನ ಹೆಸರಾಂತ ಹಿರಿಯ ಗಮಕಿ ಶ್ರೀ ಎಂ.ಆರ್.ಸತ್ಯನಾರಾಯಣ ಮತ್ತು ನಾಡಿನ ಹೆಸರಾಂತ ವ್ಯಾಖ್ಯಾನಕಾರರು ಮತ್ತು ನಿವೃತ್ತ ಪ್ರಾಂಶುಪಾಲರಾದ ಪ್ರೊ॥ ಕೆ.ಇ ರಾಧಾಕೃಷ್ಣ ಅವರ ಗಮಕ ವಾಚನವನ್ನು ಏರ್ಪಡಿಸಿತ್ತು. ಕುವೆಂಪು ರಚಿತ "ರಾಮಾಯಣ ದರ್ಶನಂ" ಕಾವ್ಯದ ಪ್ರಸಂಗವನ್ನು ಸಾದರ ಪಡಿಸಿದ್ದುದೇ ವಿಶೇಷವಾಗಿತ್ತು. ಈ ಅಪರೂಪದ ಗಮಕವಾಚನಕ್ಕೆ ಗಮಕಾಸ್ತರು ಭಾಗವಹಿಸಿ ಕಾರ್ಯಕ್ರಮದ ಯಶಸ್ಸನ್ನು ವೃದ್ಧಿಸಿದರು.

ನಿಗದಿತ ಅವಧಿಯಲ್ಲಿ ವಾಚನ-ವ್ಯಾಖ್ಯಾನವನ್ನು ಪ್ರೌಢವಾಗಿ ನಡೆಸಿ ಶ್ರೋತೃಗಳನ್ನು ತನ್ಮಯಗೊಳಿಸಿದರು. ಗಮಕ ಕಲೆಯ ಸೌಂದರ್ಯ ಮತ್ತು ಸಂಗೀತದ ಸೌರಭ ಶ್ರೋತೃಗಳು ಅನುಭವಿಸಿದರು.

ಡಾ॥ ಪಿ.ವಿ.ನಾರಾಯಣ ತಮ್ಮ ಕಾರ್ಯಕ್ರಮದ ಪ್ರಾರಂಭದಲ್ಲಿ ದತ್ತಿದಾನಿಗಳ ಮತ್ತು ಅವರ ಕುಟುಂಬದವರ ಪರಿಚಯವನ್ನು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಸಭೆಗೆ ಪರಿಚಯಮಾಡಿ, ಕಲಾವಿದರನ್ನು, ಶ್ರೋತೃಗಳನ್ನೂ ಸಭೆಗೆ ಸ್ವಾಗತಿಸಿದರು.

ಡಾ॥ ವಿಜಯಾಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

**೨೮-೦೧-೨೦೧೮**

**ಶ್ರೀ ಮೋಹನ್ ದೇವ್ ಆಳ್ವ ಮತ್ತು ಡಾ॥ ಎಂ.ಕೆ.ಶೈಲಜ ಆಳ್ವ ದತ್ತಿಯಡಿಯಲ್ಲಿ ಆಯೋಜಿಸಿದ್ದ ಭಾವಗೀತೆ ಸ್ಪರ್ಧೆ.**



ಕರ್ನಾಟಕದಲ್ಲಿ, ವಿಶೇಷವಾಗಿ ಬೆಂಗಳೂರಿನಲ್ಲಿ, ಜಾಗತೀಕರಣದ ಮತ್ತು ಯಂತ್ರೀಕರಣದ ಪ್ರಭಾವದಿಂದಾಗಿ, ಯುವ ಪೀಳಿಗೆ ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದುವ ತವಕವನ್ನು ಕಳೆದುಕೊಳ್ಳುತ್ತಿರುವ ಬಗ್ಗೆ ಹಲವಾರು ವೇದಿಕೆಗಳಲ್ಲಿ ವ್ಯಕ್ತವಾಗುತ್ತಿದೆ. ಹೀಗಿದ್ದೂ, ಮುಂದಿನ ದಿನಗಳಲ್ಲಿ ಬೆಂಗಳೂರನ್ನು ಸಾಂಸ್ಕೃತಿಕವಾಗಿ ಬೆಳೆಸಲು ಮತ್ತು ಭಾವಗೀತೆ, ಸುಗಮ ಸಂಗೀತ, ಹಿಂದೂಸ್ಥಾನೀ ಸಂಗೀತ ಕಲೆಗಳಲ್ಲಿ ಆಸಕ್ತಿ ಮತ್ತು ಅಭಿರುಚಿ ವೃದ್ಧಿಸುವ ಸಲುವಾಗಿ, ಹಿರಿಯ ದಂಪತಿಗಳಾದ ಶ್ರೀಮಾನ್ ಮೋಹನ್ ದೇವ್ ಆಳ್ವ ಮತ್ತು ಡಾ॥ ಶ್ರೀಮತಿ ಎಂ.ಕೆ. ಶೈಲಜ ಆಳ್ವ ಬಹಳ ಕಾಳಜಿ ಮತ್ತು ಶ್ರಮವಹಿಸುತ್ತಿದ್ದಾರೆ. ಅವರೇ ಯುವಪೀಳಿಗೆಗೆ ಸಂಗೀತದಲ್ಲಿ ಆಸಕ್ತಿ ಮತ್ತು ಅಭಿರುಚಿ ಮೂಡಿಸುವ ಸಲುವಾಗಿ ಅವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ದತ್ತಿ, ಸಂಗೀತ ಸ್ಪರ್ಧೆ ಆಯೋಜಿಸಿ, ಬಹುಮಾನವನ್ನು ನೀಡುವುದೇ ಪ್ರಮುಖ ಉದ್ದೇಶವಾಗಿದೆ.

ಈ ದತ್ತಿದಾನಿಗಳ ಆಶಯದಂತೆ ದಿನಾಂಕ ೨೮ ಜನವರಿ ೨೦೧೮ರಂದು ಹದಿಮೂರರಿಂದ ಇಪ್ಪತ್ತೈದು ವರ್ಷ ವಯಸ್ಸಿನ ವಿದ್ಯಾರ್ಥಿಗಳಿಗೆ ಭಾವಗೀತೆ ಸ್ಪರ್ಧೆಯನ್ನು ಪ್ರತಿಷ್ಠಾನದಲ್ಲಿ ಆಯೋಜಿಸಲಾಗಿತ್ತು. ನಗರದ ವಿವಿಧ ಶಾಲಾ ಕಾಲೇಜುಗಳಿಂದ ೩೨ ವಿದ್ಯಾರ್ಥಿ ವಿದ್ಯಾರ್ಥಿನಿಯರು ಭಾಗವಹಿಸಿದ್ದರು.

ತೀರ್ಪುಗಾರರಾಗಿ ವಿದುಷಿ ಶ್ರೀಮತಿ ಶಾರದ ವಿಶ್ವನಾಥ್ ಮತ್ತು ವಿದುಷಿ ಶ್ರೀಮತಿ ಗಿರಿಜಾಶಾಸ್ತ್ರಿ ಆಗಮಿಸಿ ಕಾರ್ಯಕ್ರಮವನ್ನು ಕ್ರಮ ಬದ್ಧವಾಗಿ ಮತ್ತು ಅಚ್ಚುಕಟ್ಟಾಗಿ ನೆರವೇರಿಸಿದರು. ವಿದ್ಯಾರ್ಥಿಗಳನ್ನು ಉದ್ದೇಶಿಸಿ, ವಿದ್ಯಾರ್ಥಿಗಳಿಗೂ ಮತ್ತು ಪೋಷಕರಿಗೂ ಹಿತವಚನಗಳನ್ನು ಹೇಳಿ, ಪೋಷಕರ ಶ್ರದ್ಧೆ ಮತ್ತು ಶ್ರಮವನ್ನು ಶ್ಲಾಘಿಸಿದರು.

ಡಾ॥ ವಿಜಯಾಸುಬ್ಬರಾಜ್ ದತ್ತಿದಾನಿಗಳನ್ನು ಸಭೆಗೆ ಪರಿಚಯಿಸಿ, ತೀರ್ಪುಗಾರರನ್ನು ಸ್ಪರ್ಧಿಗಳನ್ನು ಮತ್ತು ಪೋಷಕರನ್ನು ಕಾರ್ಯಕ್ರಮಕ್ಕೆ ಸ್ವಾಗತಿಸಿದರು. ಭಾವಗೀತೆ ಸಂಗೀತ ಸ್ಪರ್ಧೆಯ ಫಲಿತಾಂಶ:-

೧. ಮೊದಲ ಬಹುಮಾನ : ಕುಮಾರಿ ರಂಜಿತಾನಾಯ್ಕ

೨. ದ್ವಿತೀಯ ಬಹುಮಾನ : ಕುಮಾರಿ ದ್ಯುತಿ

೩. ತೃತೀಯ ಬಹುಮಾನ : ಚಿರಂಜೀವಿ ಶಮಿತ್. ವಿ. ಭಾರದ್ವಾಜ್

ಮೆಚ್ಚುಗೆಯ ಬಹುಮಾನ : ೧. ಕುಮಾರಿ. ಈ.ಆರ್. ಹರ್ಷಿತಾ

೨. ಕುಮಾರಿ. ಇಂಚರ

೩. ಕುಮಾರಿ . ಜೋಷಿತಾ

ಸಮಾಧಾನಕರ ಬಹುಮಾನ : ೧. ಮೃಣಾಲಿನಿ

೨. ಅನನ್ಯ ಭಾರದ್ವಾಜ್

೩. ವಿಜೇತಾ ಶ್ರಾವ್ಯ

೪. ಆಶಾ ಭಟ್. ಪಿ

೫. ಮೇಧಾ ಪಿ.ರಾವ್

ಡಾ॥ ಎಸ್.ಅನಿಲ್ ಕುಮಾರ್, ಸಕಲರಿಗೂ ವಂದಿಸಿದನಂತರ ಕಾರ್ಯಕ್ರಮ ಮುಕ್ತಾಯವಾಯಿತು.

**೧೨-೦೨-೨೦೧೮**

**ಪಂಡಿತ್ ಓ. ಆರ್. ರಾಮಣ್ಣ ಮತ್ತು ಶ್ರೀಮತಿ ಪುಟಮ್ಮ ದತ್ತಿ ಉಪನ್ಯಾಸ**

ವಿಷಯ: ನರಿಹರಿ ವಿರಚಿತ ತೊರವೆ ರಾಮಾಯಣ

ಉಪನ್ಯಾಸ : ಡಾ ॥ ನಿ.ಕೃ ರಾಮಶೇಷನ್, ಮೈಸೂರು

ಖ್ಯಾತ ವಿದ್ವಾಂಸರೂ ಮತ್ತು ನಿವೃತ್ತ ಜಂಟಿ ನಿರ್ದೇಶಕರಾದ ಡಾ॥ ಆರ್. ಲಕ್ಷ್ಮೀನಾರಾಯಣ, ಅವರು ತಮ್ಮ ಮಾತಾ ಪಿತೃಗಳ ಸ್ಮರಣಾರ್ಥ ಸ್ಥಾಪಿಸಿರುವ ದತ್ತಿ ಕಾರ್ಯಕ್ರಮದ ಎರಡನೆ ವರ್ಷದ ಕಾರ್ಯಕ್ರಮದಲ್ಲಿ,




'ತೊರವೆ ರಾಮಾಯಣ'ದ ಬಗ್ಗೆ ಉಪನ್ಯಾಸ ನೀಡಲು ಖ್ಯಾತ ವಿದ್ವಾಂಸರು ಮತ್ತು ಹರಿದಾಸ ಸಾಹಿತ್ಯದಲ್ಲಿ ಪಿಎಚ್.ಡಿ ಪಡೆದಿರುವ ಡಾ॥ ನೀ.ಕೃ ರಾಮಶೇಷನ್, ಮೈಸೂರಿನಿಂದ ಆಗಮಿಸಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಿದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿ.ವಿ.ನಾರಾಯಣ ಅವರು, ದತ್ತಿದಾನಿಗಳ, ಕುಟುಂಬದವರು ಉಪನ್ಯಾಸಕರ ಪರಿಚಯವನ್ನು ಸಭೆಗೆ ಮಾಡಿದರು.

ಕವಿಯ ಕಾಲ, ದೇಶ, ಅವನ ನಿಜನಾಮ, ಬಿರುದು (ಕುಮಾರ ವಾಲ್ಮೀಕಿ) ಕವಿರಾಜ ಹಂಸ, ತೊರವೆ ಸ್ಥಳನಾಮದ ನಿಷ್ಪತ್ತಿ, ಸಮಕಾಲೀನ ಇತರ ಕವಿಗಳು ಮತ್ತು ಅವರುಗಳು ರಚಿಸಿರುವ ರಾಮಾಯಣದ ಗ್ರಂಥಗಳು ಇತ್ಯಾದಿ ಕುರಿತಾದ ವಿಷಯಗಳ ಬಗ್ಗೆ ಪ್ರಾಸ್ತಾವಿಕವಾಗಿ ಮಾತನಾಡಿದರು. ಪುರಂದರ ದಾಸರು ತೊರವೆಗೆ ಭೇಟಿ ನೀಡಿದಾಗ ರಚಿಸಿದ ಕೀರ್ತನೆ "ಎದ್ದು ಬಾರೋ ರಂಗ......" ಮತ್ತು ಫ್ರೆಂಚ್ ಪ್ರವಾಸಿಯೊಬ್ಬನು ಭೇಟಿ ನೀಡಿದ ಮಾಹಿತಿಯನ್ನು ನೀಡಿದರು. ಭಾಮಿನಿ ಷಟ್ಪದಿಯಲ್ಲಿ ರಚಿಸರುವ ಈ ಕೃತಿಯು ವಾಲ್ಮೀಕಿ ರಾಮಯಣದ ಸುಂದರ ಕಾಂಡದವರೆಗೆ ಐದು ಕಾಂಡಗಳಾಗಿ ರಚಿಸಿ, ಉಳಿದ ಭಾಗವನ್ನು ಯುದ್ಧಕಾಂಡಕ್ಕೆ ಸೀಮಿತಗೊಳಿಸಿರುವುದನ್ನು ಕಾಣಬಹುದೆಂದರು.ಈ ಕಾವ್ಯವು ಐದು ಸಾವಿರದ ಇನ್ನೂರು ಪದ್ಯಗಳನ್ನು ಹೊಂದಿದೆ.

ಕುಮಾರ ವ್ಯಾಸನ ತೊರವೆ ನರಹರಿ ಮನಸಾರೆ ಹೊಗಳಿರುವ ಸಂದರ್ಭಗಳನ್ನು ಕೆಲವು ಪದ್ಯಗಳ ಮೂಲಕ ಪ್ರಸ್ತುತ ಪಡಿಸಿದರು. ಹಾಗೇಯೇ ದೇಸಿ ಜನಪದಗಳ ಬಳಕೆಯಲ್ಲಿಯೂ ಕುಮಾರ ವ್ಯಾಸನ ಪ್ರಭಾವವನ್ನು ಈತನ ಕೃತಿಯಲ್ಲಿ ಕಾಣಬಹುದೆಂದು ಕೆಲವು ಉದಾಹರಣೆಗಳ ಸಹಿತ ನೀಡಿದರು.ವಾಲ್ಮೀಕಿ ರಾಮಾಯಣದ ಕಥಾ ಪದ್ಧತಿಯನ್ನೇ ಅನುಸರಿಸಿಕೊಂಡು ಬಂದಿರುವ ನಿದರ್ಶನಗಳನ್ನು ನೀಡಿ, ವಾಲ್ಮೀಕಿ ರಾಮಾಯಣದ ಗತವೈಭವದ ನೆನಪು ಇರುವುದನ್ನು ಕಾಣಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.ಕುಮಾರ ವಾಲ್ಮೀಕಿಯ ಪ್ರಭಾವವನ್ನು ಅವನ ನಂತರ ರಚಿತವಾದ ಕೃತಿಗಳಲ್ಲಿಯೂ ಮತ್ತು ಯಕ್ಷಗಾನ ರಾಮಾಯಣಗಳಲ್ಲೂ ಕಾಣಬಹುದು ಎಂದು ಹೇಳಿದರು.

ಕಾರ್ಯಕ್ರಮವು ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

## ೧೬-೨-೨೦೧೮

## ಆ.ನೇ.ಉಪಾಧ್ಯ, ಡಿಎಲ್.ಎನ್. ಎಂ.ಜಿ.ನಂಜುಂಡಾರಾಧ್ಯ ಸೋಸಲೆ ಅಯ್ಯಾಶಾಸ್ತ್ರೀ ದತ್ತಿ ಉಪನ್ಯಾಸ

ಉಪನ್ಯಾಸಕರು : ಬಿಳಿಗಿರಿವಾಸನ್, ನಿವೃತ್ತ ಕನ್ನಡ ಪ್ರಾಧ್ಯಾಪಕರು

ವಿಷಯ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರಕ್ಕೆ ಡಿಎಲ್ ಎನ್ ಅವರ ಕೊಡುಗೆ

ಮೊದಲಿಗೆ ಡಾ.ಪಿ.ವಿ.ನಾರಾಯಣ ಅವರು ಸಂಯುಕ್ತ ದತ್ತಿ ದಾನಿಗಳ ಪರಿಚಯ ಮತ್ತು ಕನ್ನಡ ನುಡಿಯ ವಿದ್ವತ್ ಪ್ರಪಂಚಕ್ಕೆ ಅವರೆಲ್ಲರ




ಅಪಾರ ವ್ಯಾಸಂಗ, ಅಖಂಡ ಅನುಭವವನ್ನು ಸಂಕ್ಷಿಪ್ತವಾಗಿ ವಿವರಿಸಿದರು.ನಂತರ ಉಪನ್ಯಾಸಕರ ಪರಿಚಯ ಮಾಡಿ, ವೇದಿಕೆಗೆ ಆಹ್ವಾನಿಸಿದರು.

ಉಪನ್ಯಾಸಕರು ತಮ್ಮ ಮಾತಿನ ಮೊದಲಿಗೆ ಡಿಎಲ್.ಎನ್ ಅವರು ವಿದ್ಯಾಭ್ಯಾಸ, ವೃತ್ತಿ, ಅವರು ಕನ್ನಡ ವಿದ್ವತ್ ಪ್ರಪಂಚಕ್ಕೆ ನೀಡಿದ ಉದ್ಗ್ರಂಥಗಳು, ಹೀಗೆ ಪ್ರಾಸ್ತಾವಿಕವಾಗಿ ಮಾತನಾಡಿ, ಗ್ರಂಥ ಸಂಪಾದನಾ ಶಾಸ್ತ್ರದ ಬೆಳವಣಿಗೆಯನ್ನು ಕೆಳ ಕಂಡ ನಾಲ್ಕು ಹಂತಗಳಲ್ಲಿ ಕಾಣಬಹುದೆಂದು ಸೋದಾಹರಣವಾಗಿ ಈ ರೀತಿ ಗುರುತಿಸಿದರು.

೧. ಪಾಶ್ಚಾತ್ಯ ಮಿಷನರಿಗಳು ಕೈಗೊಂಡ ಕಾರ್ಯಗಳು ಮತ್ತು ಕೊಡುಗೆಗಳು

೨. ದೇಶೀಯ ವಿದ್ವಾಂಸರ ಕಾರ್ಯಗಳು ಮತ್ತು ಅವರ ಕೊಡುಗೆಗಳು

೩. ಶ್ರೀ ಡಿಎಲ್.ಎನ್ ಅವರ ಅಖಂಡ ವ್ಯಾಸಂಗ, ಅನುಭವ, ಪ್ರಯೋಗಗಳು ಮತ್ತು ಅವರ ಪ್ರಕಟಿಸಿದ ಉದ್ಗ್ರಂಥಗಳು.

೪. ಡಿಎಲ್ಎನ್ ನಂತರದ ವಿದ್ವಾಂಸರ ಕೊಡುಗೆಗಳು

ಆನಂತರದಲ್ಲಿ ಗ್ರಂಥಸಂಪಾದನೆಯ ಚರಿತ್ರೆ, ಲೇಖನ ಸಾಮಗ್ರಿಗಳು, ಹಸ್ತಪ್ರತಿಗಳ ಸ್ವರೂಪ ಮತ್ತು ಅವುಗಳ ವಿಂಗಡನೆ, ಲಿಪಿಕಾರರು ಮತ್ತು ಅವರ ಆದರ್ಶ ಮುದ್ರಿತ ಗ್ರಂಥಗಳ ಸಂಪಾದನೆ, ಹೀಗೆ ಹಲವಾರು ವಿಷಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿದರು.

ನಂತರ ಪ್ರೊ ॥ ಜಿ. ಅಶ್ವತ್ಥನಾರಾಯಣ, ಖ್ಯಾತ ಕನ್ನಡ ವಿದ್ವಾಂಸರು, ಉಪನ್ಯಾಸಕರು ಹೇಳಿದ ಅಂಶಗಳಿಗೆ ಪೂರಕವಾಗಿ ಪಾಠಾಂತರ ಸಂಕಲನ, ಸ್ಖಾಲಿತ್ಯಗಳು ಮತ್ತು ಸ್ಖಾಲಿತ್ಯಗಳ ಪ್ರಭೇದಗಳು(ಕಣ್ತಪ್ಪು, ರೂಪಸಾದೃಶ್ಯ ಹೀಗೆ) ಮತ್ತು ಪಾಠ ಪರಿಷ್ಕರಣಗಳ ಬಗ್ಗೆ ವಿವರ ನೀಡಿದರು.

ಡಾ॥ ವಿಜಯಾ ಸುಬ್ಬರಾಜ್, ಉಪನ್ಯಾಸಕರಿಬ್ಬರಿಗೂ ಮತು ಉಪನ್ಯಾಸದಲ್ಲಿ ಹಾಜರಿದ್ದ ಎಲ್ಲಾ ವಿದ್ವಾಂಸರಿಗೂ ವಂದನೆ ಸಲ್ಲಿಸಿದರು.

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಮಳೆಯಿಲ್ಲ, ಬೆಳೆಯಿಲ್ಲ
ಕುಡಿಯುವ ನೀರಲ್ಲ, ಇದೆಲ್ಲ
ಪ್ರಕೃತಿಯ ಮುನಿಸೆಂದು ಹೇಳುವರು ಎಲ್ಲ;
ಮರಗಿಡ ಅರಣ್ಯಗಳ ಸುಲಿದು ತಿನ್ನುವ
ಬುದ್ಧಿಗೇಡಿಗಳಿಗೆ ಇದೆಲ್ಲ ಅರ್ಥವಾಗುವುದಿಲ್ಲ;
ಅಂತರ್ಜಲಮರುಪೂರಣ ಮಾಡದ
ಕೆರೆಕಟ್ಟೆ ಡ್ಯಾಮುಗಳ ಹೂಳೆತ್ತದಿರುವ
ಮೂರ್ಖ ಮಂದಿಗೆ ತಿಳುವು ಮೂಡಿಸೊ 'ಅಲ್ಲಾರಖಾ'!

॥೩೦॥




ದಿವ್ಯ: ಈ ಶಬ್ದವು ದೈವಕ್ಕೆ ಅಥವಾ ಸ್ವರ್ಗಕ್ಕೆ ಸಂಬಂಧಿಸಿದುದು ಎಂಬರ್ಥದ ಸಂಸ್ಕೃತ ವಿಶೇಷಣ.ಆದರೆ ಇದನ್ನು ಒಂದು ನಾಮಪದವಾಗಿ ಹಾಗೂ ಪರಿಭಾಷೆಯಾಗಿ ಬಳಸುವ ರೂಢಿಯು ಕನ್ನಡ ನಾಡಿನಲ್ಲಿ ಹಿಂದಿನಿಂದಲೂ ಇದೆ.ಅಪರಾಧವೊಂದು ನಡೆದರೆ ಅದನ್ನು ಸಾಬೀತುಪಡಿಸಲು ಸಾಕ್ಷ್ಯ ಬೇಕು. ಸಾಕ್ಷ್ಯಗಳು ಎರಡು ಬಗೆ: ಮಾನುಷ ಹಾಗೂ ದೈವ. ಅಪರಾಧವನ್ನು ಕಣ್ಣಾರೆ ಕಂಡವನು ಇಲ್ಲದಿದ್ದಾಗ ಹಿಂದಿನವರು ಮೊರೆಹೊಗುತ್ತಿದ್ದುದು ದಿವ್ಯಸಾಕ್ಷ್ಯವನ್ನು. ಇದನ್ನೇ 'ದಿವ್ಯ' ಅಥವಾ 'ದಿಬ್ಯ' ಎಂದು ಕರೆಯುವುದು [ಇಂಗ್ಲಿಷ್‌ನಲ್ಲಿ ಆರ್ಡಿಯಲ್ ಎನ್ನುತ್ತಾರೆ].ರಾಜದ್ರೋಹ, ದೊಡ್ಡ ಪಾತಕಗಳು ಅಥವಾ ಭಾರಿ ಮೊತ್ತದ ಹಣ ವ್ಯವಹಾರದ ಮೋಸ ಇಂಥವುಗಳ ತೀರ್ಮಾನ ಮಾಡಲು ಮಾತ್ರವೇ 'ದಿವ್ಯ'ವನ್ನು ಆಧರಿಸಬೇಕು ಎಂದು 'ಅಗ್ನಿಪುರಾಣ'ವು ಹೇಳುತ್ತದೆ. ಕನ್ನಡದ ಕಾವ್ಯ ಶಾಸನಗಳಲ್ಲಿ ದಿವ್ಯದ ಉಲ್ಲೇಖಗಳನ್ನು ಹೇರಳವಾಗಿ ಕಾಣಬಹುದು.

ದಿವ್ಯಗಳಲ್ಲಿ ಎಷ್ಟು ವಿಧ ಹಾಗೂ ಅವುಗಳ ಸ್ವರೂಪದ ಬಗ್ಗೆ ಏಕಾಭಿಪ್ರಾಯವಿಲ್ಲ. ಐದರಿಂದ ಒಂಬತ್ತು ವಿಧಧ ದಿವ್ಯಗಳನ್ನು ವಿವಿಧ ಸ್ಮೃತಿಗಳು ಉಲ್ಲೇಖಿಸುತ್ತವೆ. ವಿಷ್ಣುಸ್ಮೃತಿಯು ದಿವ್ಯಗಳನ್ನು ಎರಡು ಗುಂಪುಗಳಾಗಿ ವಿಂಗಡಿಸುತ್ತದೆ: ಸಾಧಾರಣ ಮತ್ತು ಮುಖ್ಯ. ಮೊದಲನೆಯವು ಕೆಲವು ವಸ್ತುಗಳನ್ನು ಹಿಡಿದು ಪ್ರಮಾಣ ಮಾಡುವುದನ್ನು ಒಳಗೊಂಡರೆ, ಎರಡನೆಯದು ಕಷ್ಟಕರವಾದ ನಾನಾ ಬಗೆಯ ಪರೀಕ್ಷೆಗಳನ್ನು ಒಳಗೊಳ್ಳುವಂಥದು.

ಕನ್ನಡ ನಾಡಿನಲ್ಲಿ ಪ್ರಚಲಿತವಿದ್ದುದು ಮುಖ್ಯವಾಗಿ ಏಳು ಬಗೆ–ಯ ದಿವ್ಯಗಳು ಎನ್ನಲಾಗಿದೆ.ಅವುಗಳೆಂದರೆ ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ ಮತ್ತು ವಿಷ. ಹಲ್ಲು ಕೀಳದ ಸರ್ಪವನ್ನು ಹಿಡಿದು–ಕೊಂಡರೂ ಅದು ಕಚ್ಚದಿದ್ದರೆ ಅಂಥವನು ನಿರಪರಾಧಿ; ಈ 'ಸರ್ಪದಿವ್ಯ'ದ ಉಲ್ಲೇಖ ಬಸವಣ್ಣನ ವಚನವೊಂದರಲ್ಲಿದೆ. ಅಂತೆಯೇ ಕೆಂಪಗೆ ಕಾದ ಪಂಚಲೋಹದ ಗುಂಡು ಅಥವಾ ಕಬ್ಬಿಣದ ಗುಳವನ್ನು ಹಿಡಿದುಕೊಳ್ಳುವ ಅಗ್ನಿದಿವ್ಯದ ಪ್ರಸ್ತಾಪ ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಲ್ಲಿದೆ.ಹೀಗೆ ದಿವ್ಯಕ್ಕೊಳಗಾಗಿ ನಿರಪರಾಧಿಯೆಂದು ಪರಿಗಣಿತನಾದವನಿಗೆ 'ಜಯಪತ್ರ'ವನ್ನು ಕೊಡುತ್ತಿದ್ದರಂತೆ.

=====

ದೇಸಿ: ಇದು ದೇಶ ಎಂಬುದರಿಂದಾದ ದೇಶಿ ಎಂಬ ಸಂಸ್ಕೃತ ಶಬ್ದದ ಮತ್ತೊಂದು ರೂಪ. ಈ ಶಬ್ದವು ಅನೇಕ ಅರ್ಥಗಳನ್ನೊಳಗೊಂಡು ಬಳಕೆಯಾಗಿದೆ. ಸ್ಥಳೀಯ ಸಂಸ್ಕೃತಿಗೆ ಈ ಹೆಸರೀಗ ಸಲ್ಲುತ್ತಿದೆ. ಕವಿರಾಜಮಾರ್ಗದಲ್ಲಿಯೇ ದೇಶಿ ದೇಸಿ ಎಂಬೆರಡು ರೂಪಗಳೂ ಸಿಕ್ಕುತ್ತವೆ. ದೇಶಿ ಎಂಬುದು [ಕನ್ನಡದ] ಉಪಭಾಷೆ [ದೇಶಿ ಬೇಱೆವೇಱಪ್ಪುದಱಿಂ] ಎಂಬರ್ಥದಲ್ಲಿದ್ದರೆ, ದೇಸಿ ಎಂಬುದು ಬಳಕೆಯ ನುಡಿ [ದೇಸಿಯಲ್ಲವೆಂದದಱಿದಿರ್ದುಂ] ಎಂಬರ್ಥದಲ್ಲಿಯೂ, ಅಚ್ಚಗನ್ನಡದ [ದೇಶಿಯನೆ ನಿಱಿಸಿ] ಎಂಬರ್ಥದಲ್ಲಿಯೂ ಬಳಕೆಯಾಗಿದೆ.ಪಂಪಭಾರತದ "ಬಗೆ ಪೊಸತಪ್ಪುದಾಗೆ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು" ಎಂಬ ಪ್ರಸಿದ್ಧವಾಕ್ಯದಲ್ಲಿ ಈ ಶಬ್ದವು ಜನಪದದ ಸ್ವಂತಿಕೆ ಎಂಬರ್ಥದಲ್ಲಿ ಬಳಕೆಯಾಗಿದೆ.

ಬಹು ಹಿಂದಿನಿಂದಲೇ ಕನ್ನಡದಲ್ಲಿ ಮಾರ್ಗ–ದೇಶಿ ಎಂಬ ಶಬ್ದಗಳು ಕಾವ್ಯರೂಪಕ್ಕೆ ಅನ್ವಯಿಸುವಂತೆ ಬಳಕೆಯಾಗಿವೆ. ಮಾರ್ಗವು ಸಂಸ್ಕೃತ ಪರಂಪರೆಯನ್ನು ಮಾದರಿಯಾಗಿರಿಸಿಕೊಂಡಂಥದಕ್ಕೂ, ದೇಸಿ ಕನ್ನಡಕ್ಕೆ ವಿಶಿಷ್ಟವಾದ ಸ್ವಂತದ್ದಕ್ಕೂ ಅನ್ವಯಿಸುತ್ತದೆಂದು ಸ್ಥೂಲವಾಗಿ ಹೇಳಬಹುದು. ಇದು ಪಂಪನ ಮಾತಿನಲ್ಲಿಯೇ ವ್ಯಕ್ತವಾಗಿದೆ.ಜಾನಪದ ಎಂಬ ಅರ್ಥವೂ ಇದಕ್ಕೆ ಹೊಂದುವಂತಿದೆ.

ಸ್ವಂತದ್ದೇ ಸುಂದರವಾದುದು ಎಂಬ ಭಾವನೆಯಿಂದಾಗಿಯೋ ಏನೋ ಮುಂದೆ ಈ ಪದಕ್ಕೆ ಸುಂದರವಾದುದು ಎಂಬ ಅರ್ಥವೇ ಪ್ರಾಪ್ತವಾಗಿದೆ."ಚರಣಂ ನವಕೇಸರದೊಂದು ದೇಸಿಯಂ ಪ್ರಕಟಿಸೆ" ಎಂಬ ಮಾತು 'ಕರ್ಣಾಟಕ ಕಾದಂಬರಿ'ಯಲ್ಲಿದ್ದರೆ, "ಪೊಸದೇಸಿವೆತ್ತು ಎಸೆದುದಲ್ಲಿ ನರೇಂದ್ರಕುಮಾರಸಂಕುಳಂ" ಎಂಬ 'ರಾಜಶೇಖರವಿಳಾಸ'ವೆಂಬ ಕಾವ್ಯದ ಮಾತಿನಲ್ಲಿ ಬೆಡಗು ಎಂಬರ್ಥವನ್ನು ತಾಳಿದೆ. ದೇಸಿ ಎಂಬುದು ದೇಸೆ ಎಂಬ ರೂಪವನ್ನೂ ಪಡೆಯುತ್ತದೆ. ದೇಸಿಯಿಂದ ರೂಪಿತವಾದ ದೇಸಿಗ, ದೇಸಿಗಿತಿ ಎಂಬ ಶಬ್ದಗಳು ನಿರ್ಗತಿಕ[ಳು] ಎಂಬರ್ಥದಲ್ಲಿ ಬಳಕೆಯಾಗಿವೆ. "ಲಲ್ಲೆಯ ಸಗ್ಗದ ದೇಸೆಕಾರ್ತಿಯರ್" ಎಂಬ 'ಆದಿಪುರಾಣ'ದ ಮಾತಿನಲ್ಲಿ ದೇಸೆಕಾರ್ತಿ ಎಂಬುದು ಸುಂದರಿ ಎಂಬರ್ಥದಲ್ಲಿ ಬಳಕೆಯಾಗಿದೆ.

## ಬಿ.ಎಂ.ಶ್ರೀ ಪ್ರತಿಷ್ಠಾನದ ನೂತನ ಪ್ರಯೋಗ
## ಸಾಹಿತ್ಯಾಸಕ್ತರಿಗೆ ಉಚಿತ ಪುಸ್ತಕ ವಿತರಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ ೩೭ವರ್ಷಗಳಿಂದ ಅವಿರತವಾಗಿ ಸೇವೆ ಸಲ್ಲಿಸುತ್ತಿದೆ. ಪ್ರತಿಷ್ಠಾನವು ಪ್ರತಿ ತಿಂಗಳು ಆರಕ್ಕೆ ಕಡಿಮೆಯಿಲ್ಲದಂತೆ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಈ ಕಾರ್ಯಕ್ರಮಗಳಲ್ಲಿ ಉತ್ತಮ ಸಂಖ್ಯೆಯಲ್ಲಿ ಭಾಗವಹಿಸುತ್ತಿರುತ್ತಾರೆ. ಸಾಹಿತ್ಯಾಸಕ್ತರು ಹಾಗೂ ಸಾರ್ವಜನಿಕರು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯನ್ನು ಬೆಳೆಸಿಕೊಳ್ಳುವುದನ್ನು ಪ್ರೋತ್ಸಾಹಿಸಲು ೭ನೇ ಜೂನ್ ೨೦೧೭ರಿಂದ ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಎಲ್ಲ ಸಾಹಿತ್ಯಾಸಕ್ತರಿಗೆ ಕೊಡುಗೆ–ಯಾಗಿ ಪ್ರತಿಷ್ಠಾನವು ತನ್ನ ಪ್ರಕಟಣೆಗಳ ಪ್ರತಿಗಳನ್ನು ಉಚಿತವಾಗಿ ನೀಡುವ ಪರಿಪಾಠವನ್ನು ಬೆಳೆಸಿಕೊಂಡು ಬರುತ್ತಿದೆ. ಇದುವರೆಗೂ ೪೦ ಕಾರ್ಯಕ್ರಮಗಳಲ್ಲಿ ೧,೨೫೧ ಪುಸ್ತಕಗಳ ಪ್ರತಿಗಳನ್ನು ಸಾಹಿತ್ಯಾಸಕ್ತರಿಗೆ ನೀಡಲಾಗಿದೆ. ಈ ಕೊಡುಗೆಯ ಸದುಪಯೋಗವನ್ನು ಪಡೆದುಕೊಳ್ಳಬೇಕೆಂದು ಪ್ರತಿಷ್ಠಾನದ ಅಭಿಮಾನಿಗಳನ್ನು ವಿನಂತಿಸುತ್ತೇವೆ.

# ನಮ್ಮ ವಿದ್ವತ್ ಬಳಗ

## ಕಿರುಪರಿಚಯಗಳು

### ಡಾ. ಆರ್. ಲಕ್ಷ್ಮೀನಾರಾಯಣ

ಡಾ. ಆರ್.ಲಕ್ಷ್ಮೀನಾರಾಯಣ ಅವರು ೧೯೭೧ ರಿಂದ ೨೦೦೬ರವರೆಗೆ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಮತ್ತು ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ, ೨೦೦೬ ಮೇ ಯಿಂದ ೨೦೦೭ರಡಿಸೆಂಬರ್ ವರೆಗೆ ಧಾರವಾಡದಲ್ಲಿ ಇಲಾಖೆಯ ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿರುತ್ತಾರೆ.ಡಾ. ಪಿ. ವಿ ನಾರಾಯಣ ಅವರ ಮಾರ್ಗದರ್ಶನದಲ್ಲಿ ೨೦೦೪ರಲ್ಲಿ ' ವಕ್ರೋಕ್ತಿ ಜೀವಿತ– ಒಂದು ಅಧ್ಯಯನ' ಎಂಬ ಮಹಾ ಪ್ರಬಂಧಕ್ಕೆ ಬೆಂಗಳೂರು ವಿಶ್ವ ವಿದ್ಯಾಲಯದ ಪಿಎಚ್. ಡಿ ಪದವಿ ಪಡೆದಿರುತ್ತಾರೆ. ಇಂಗ್ಲಿಷ್ ಮತ್ತು ಹಿಂದಿಯಿಂದ ಅನುವಾದ ಮಾಡುವುದರಲ್ಲಿ ನಿರತರು.

ಆರು ವಿಮರ್ಶಾ ಕೃತಿಗಳು, ಹನ್ನೊಂದು ಅನುವಾದಿತ ಕೃತಿಗಳು ಹಾಗೂ ಮೂರು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ.

ಪ್ರಶಸ್ತಿಗಳು: ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಪ್ರಶಸ್ತಿ, ೨೦೦೪ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೨೦೧೩ರ ಕರ್ನಾಟಕ ಸಾಹಿತ್ಯ ಅಕಡೆಮಿ ಪ್ರಶಸ್ತಿ, ಗೊರೂರು ಸಾಹಿತ್ಯ ಪ್ರಶಸ್ತಿ ಹಾಗೂ ರಾಜ್ಯ ಸರ್ಕಾರದಿಂದ ಉತ್ತಮ ಕಾಲೇಜು ಶಿಕ್ಷಕ ಪ್ರಶಸ್ತಿ

### ಶ್ರೀಮತಿ ಇಂದುಮತಿ ರಾಮ್ ಕುಮಾರ್

ಶ್ರೀಮತಿ ಇಂದುಮತಿ ರಾಮ್ ಕುಮಾರ್ ಬಿ.ಎ. ಪದವೀಧರೆ. ಪ್ರಸ್ತುತ ನಾದತರಂಗ ಹೆಸರಿನಲ್ಲಿ ಸಂಗೀತ ಶಾಲೆ ನಡೆಸುತ್ತಿದ್ದಾರೆ. ಇಲ್ಲಿಯವರೆಗೂ ನೂರಾರು ಮಹಿಳೆಯರಿಗೆ, ವಿದ್ಯಾರ್ಥಿಗಳಿಗೆಭಕ್ತಿಗೀತೆಗಳನ್ನು ಹಾಗೂಸಂಗೀತ ಪಾಠವನ್ನು ಹೇಳಿ ಕೊಡುತ್ತಾರೆ .ವಾದಿರಾಜರ ವಿರಚಿತ ಲಕ್ಷ್ಮೀ ಶೋಭಾನೆ ಕಾರ್ಯಕ್ರಮವನ್ನು ಸುಮಾರು ೧೫೦ಕ್ಕೂ ಹೆಚ್ಚು ಕಡೆಗಳಲ್ಲಿ ಕಾರ್ಯಕ್ರಮವನ್ನು ಕೊಟ್ಟಿರುತ್ತಾರೆ. ಎಲ್ಲ ಬಗೆಯ ಸಂಗೀತ ಕೃತಿಗಳಲ್ಲಿಯೂ ಪಳಗಿದ ಧ್ವನಿ ಇವರಿದಾಗಿದೆ.

### ಡಾ|| ನೀ.ಕೃ. ರಾಮಶೇಷನ್

ಇವರು ಕನ್ನಡದಲ್ಲಿ ಬಹಳಷ್ಟು ಗುರುತಿಸಿಕೊಂಡಿರುವ ವಿದ್ವಾಂಸರು. ವಿಜ್ಞಾನ, ಕಾನೂನು ಪದವೀಧರರಾಗಿರುವುದರ ಜೊತೆಗೆ ಹಿಂದಿ, ಸಂಸ್ಕೃತ ಭಾಷೆಗಳಲ್ಲಿಯೂ ಪರಿಣತರು. 'ಹರಿದಾಸ ಆಂದೋಲನ'ವೆಂಬ ವಿಷಯದಲ್ಲಿ ಡಾಕ್ಟರೇಟ್ ಪಡೆದಿದ್ದಾರೆ.

ಪೋಸ್ಟ್ ಡಾಕ್ಟರೇಟ್ ಅಧ್ಯಯನ, ಸಮಾಜೋ ಸಾಂಸ್ಕೃತಿಕ ಅಧ್ಯಯನಗಳ ಜೊತೆಗೆ ಪ್ರಾಕೃತ ಭಾಷೆಲ್ಲಿ ಪರಿಣತರು. ಸುಮಾರು ಐವತ್ತು ವರ್ಷಗಳಿಗೂ ಮೀರಿ, ಆಕಾಶವಾಣಿ ಕಾರ್ಯಕ್ರಮಗಳಲ್ಲಿ ನಿರಂತರವಾಗಿ ಭಾಗವಹಿಸಿದ್ದಾರೆ. ಗಮಕ ವಾಚನ, ವ್ಯಾಖಾನ ಕಾರ್ಯಕ್ರಮಗಳನ್ನು ಹತ್ತಾರು ಕಡೆ ನೀಡುತ್ತಾ ಬಂದಿದ್ದಾರೆ. ಅನೇಕ ಶೈಕ್ಷಣಿಕ ಸಮಿತಿಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಬಹುಭಾಷಾ ಸಾಹಿತ್ಯ ವಿಮರ್ಶಾ ಪ್ರಜ್ಞ, ತೌಲನಿಕ ದೃಷ್ಟಿಯಿಂದಾಗಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖರೆನಿಸಿಕೊಂಡಿದ್ದಾರೆ.

### ಪ್ರೊ|| ಎಸ್. ಬಿಳಿಗಿರಿವಾಸನ್

ಪ್ರೊ|| ಎಸ್. ಬಿಳಿಗಿರಿವಾಸನ್ ಅವರು ಕನ್ನಡ ಪ್ರಾಚಾರ್ಯರಾಗಿ ನಿವೃತ್ತರಾಗಿದ್ದು ಪ್ರಸ್ತುತ ಸಾಧನ ಪದವಿ ಕಾಲೇಜಿನಲ್ಲಿ ಕನ್ನಡ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.ಇವರು ಸಂಸ್ಕೃತದ ಭಗವದ್ಗೀತೆಯನ್ನು 'ಸಿರಿಗನ್ನಡ ಸರಳ ಭಗವದ್ಗೀತೆ' ಎಂಬ ಅನುವಾದವನ್ನು ಪ್ರಕಟಿಸಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ 'ಅಪ್ಪರ್' ಎಂಬ ಇಂಗ್ಲಿಷ್ ಕೃತಿಯನ್ನೂ, 'ರಾಚಕೊಂಡ ವಿಶ್ವನಾಥ ಶಾಸ್ತ್ರಿ' ಮತ್ತು 'ಸ್ವರಲಯಲು' ಎಂಬ ತೆಲುಗು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇಂಗ್ಲಿಷ್, ತೆಲುಗು ಹಾಗೂ ಸಂಸ್ಕೃತ ಭಾಷೆಗಳಿಂದ ಕನ್ನಡಕ್ಕೆ ಹಲವಾರು ಕೃತಿಗಳನ್ನು ಅನುವಾದಿಸಿದ್ದಾರೆ. ಬಿ.ಎಂ.ಶ್ರೀ ಪ್ರತಿಷ್ಠಾನ ಇತ್ಯಾದಿ ಸಂಸ್ಥೆಗಳಲ್ಲಿ ಉಪನ್ಯಾಸಗಳನ್ನು ನೀಡಿದ್ದಾರೆ.

### ಡಾ. ಎಚ್.ಎಸ್. ರಾಘವೇಂದ್ರ ರಾವ್

ಹುಟ್ಟು: ೦೧–೦೮–೧೯೫೫, ಚಿತ್ರದುರ್ಗ

ವೃತ್ತಿಜೀವನ: ಅ. ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು, ನ್ಯಾಷನಲ್ ಕಾಲೇಜು, ಜಯನಗರ, ಬೆಂಗಳೂರು (೧೯೭೭–೨೦೦೬)

ಆ. ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ (೧೯೯೨–೧೯೯೫)

ಇ. ಸಂಪನ್ಮೂಲ ವ್ಯಕ್ತಿ, ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್, ಮೈಸೂರು, (೨೦೦೮–೦೯)

ಈ. ಸಂದರ್ಶಕ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ ೨೦೧೦–೧೨

ಉ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯ (೨೦೦೦–೨೦೦೩)

ಊ. ಕೇಂದ್ರಸರ್ಕಾರದ ಸಂಸ್ಕೃತಿ ಇಲಾಖೆ: 'ಸೀನಿಯರ್ ಫೆಲೋಶಿಪ್' (೨೦೧೩–೨೦೧೫)

ಪ್ರಶಸ್ತಿಗಳು: ರಾಜ್ಯೋತ್ಸವ ಪ್ರಶಸ್ತಿ, ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಡಾ. ಜಿ.ಎಸ್.ಶಿವರುದ್ರಪ್ಪ ಪ್ರಶಸ್ತಿ, ವಿ.ಎಂ.ಇನಾಂದಾರ್ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ, ವರ್ಧಮಾನ ಪ್ರಶಸ್ತಿ, ಎಲ್. ಬಸವರಾಜು ಪ್ರಶಸ್ತಿ, ಬರಗೂರು ಪ್ರಶಸ್ತಿ. ಕುವೆಂಪು ಭಾಷಾಭಾರತಿ ಪ್ರಶಸ್ತಿ, ಶಾ. ಬಾಲೂರಾವ್ ಅನುವಾದ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ

ಪ್ರಕಟಿಸಿರುವ ಪುಸ್ತಕಗಳು ೩೨ ಕೃತಿಗಳು

ಇತರ ಹೊಣೆಗಳು:

೧.'ಅನಿಕೇತನ' ಪತ್ರಿಕೆಯ ಸಂಪಾದಕ

೨. ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದ 'ಕನ್ನಡ ಅಧ್ಯಯನ' ಪತ್ರಿಕೆಯ ಮೊದಲ ಸಂಪಾದಕ

೩. 'ಅಂಕಣ' ಸಾಹಿತ್ಯ ಪತ್ರಿಕೆಯ ಸ್ಥಾಪಕರಲ್ಲಿ ಒಬ್ಬರು

### ಶ್ರೀಮತಿ. ರಂಗನಾಯಕಮ್ಮ – ಶ್ರೀ ಕೆ.ಜಿ.ಸುಬ್ಬರಾವ್ ನೆನಪಿನ ಸಂಗೀತಕಾರ್ಯಕ್ರಾಮ ದತ್ತಿ ನಿಧಿ.

ದಿವಂಗತ ಶ್ರೀ ಕೆ.ಜಿ. ಸುಬ್ಬರಾವ್ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ತಮ್ಮ ಸ್ನಾತಕ ಪದವಿಯನ್ನು ಪಡೆದು, ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಸೇವೆ ಸಲ್ಲಿಸಿ, ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ನಿವೃತ್ತಿಹೊಂದಿದ್ದರು. ಈ ದಂಪತಿಗಳ ಹಿರಿಯ ಮಗಳಾದ ಶ್ರೀಮತಿ ಸುನಂದ ಅವರು ತಮ್ಮ ವಿದ್ಯಾಭ್ಯಾಸದ ನಂತರ ಸಂಗೀತವನ್ನು ದಿವಂಗತ ಡಿ.ಸುಬ್ಬರಾಮಯ್ಯನವರ ಬಳಿ ಅಭ್ಯಾಸ ಮಾಡಿ, ಹಲವಾರು ಪ್ರಶಸ್ತಿ ಮತ್ತು ಬಹುಮಾನಗಳನ್ನು ಪಡೆದಿದ್ದಾರೆ. ಶ್ರೀಮತಿ ಸುನಂದ ಅವರು ತಮ್ಮ ಮಾತಾಪಿತೃಗಳ ನೆನಪಿನಲ್ಲಿ ಜನವರಿಯಲ್ಲಿ ಒಂದು ಸಂಜೆ ಸಂಗೀತ ಕಾರ್ಯಕ್ರಮವನ್ನು ಆಯೋಜಿಸಲೆಂದು ಒಂದು ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ.

## FORM IV

(See Rule-8)

Statement about ownership and other particulars about Newspaper "HONGANASU Kannada Monthly" Bangalore. As required under Rules 8 of the Registration A Newspapers (Central) Rules 1956.

| | | | |
|---|---|---|---|
| 1. | Place of Publication | — | Bangalore |
| 2. | Periodicity of publication | — | Monthly |
| 3. | Printer's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 4. | Publisher's Name | | Sri. B.R. Ravindranath on behalf of the BMSree Smaraka Pratishtana, (Regd.) |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 5. | Editor's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |

I, B.R. Ravindranath here by Declare that the particulars given are true to the best of my knowledge and belief.

Bangalore

1st March, 2018

Sd/-

B.R. Ravindranath

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 28-02-2018**

## ೨೦೧೮ ಫೆಬ್ರವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಪ್ರತಿಷ್ಠಾನದ ಗ್ರಂಥಾಲಯದಲ್ಲಿ ಹೆಚ್ಚುವರಿ ಪುಸ್ತಕಗಳನ್ನು (ದ್ವಿಪ್ರತಿ, ತ್ರಿಪತಿ) ಗುರುತಿಸಿ, ಅವುಗಳ ಪಟ್ಟಿಯನ್ನು ತಯಾರಿಸುವ ಕಾರ್ಯ ನಡೆಯುತ್ತಿದೆ.ಹಸ್ತಪ್ರತಿ ವಿಭಾಗದ ಸಂಯೋಜಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಕಳೆದ ಜನವರಿ ತಿಂಗಳಿನಿಂದ ಗ್ರಂಥಾಲಯದ ಹೆಚ್ಚುವರಿ ಪುಸ್ತಕಗಳನ್ನು ಗುರುತಿಸಿ, ಪಟ್ಟಿ ತಯಾರಿಸಿ, ವಿಶ್ವವಿದ್ಯಾಲಯಗಳಿಗೂ, ಕೆಲವು ಕಾಲೇಜುಗಳಿಗೂ ಕಳುಹಿಸಿಕೊಡುವ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಅವರಿಗೆ ಸಹಾಯ ನೀಡುವ ಸಲುವಾಗಿ ಶ್ರೀಮತಿ ವೀಣಾ ಮತ್ತು ಕಚೇರಿಯ ಸಿಬ್ಬಂದಿವರ್ಗವೂ ಕೈಜೋಡಿಸುತ್ತಿದ್ದಾರೆ.ಸಂಶೋಧನಾ ಸಂಸ್ಥೆಗಳಿಗೆ, ಕಾಲೇಜುಗಳಿಗೆ ಮತ್ತು ವಿಶ್ವವಿದ್ಯಾಲಯಗಳಿಗೆ ಉಪಯೋಗವಾಗುವಂತಹ ಪುಸ್ತಕಗಳನ್ನು ಪಟ್ಟಿಮಾಡಿ, ಈಗಾಗಲೇ ಹಲವು ಸಂಸ್ಥೆಗಳು ನಮ್ಮಿಂದ ಪುಸ್ತಕಗಳನ್ನು ಸ್ವೀಕರಿಸಿವೆ.ಕೆಲವು ಕಾಲೇಜುಗಳಿಂದ ಪುಸ್ತಕಗಳಿಗಾಗಿ ಮನವಿ ಪತ್ರಗಳೂ ಬಂದಿವೆ. ಈ ಕಾರ್ಯವು ಫೆಬ್ರವರಿ ಅಂತ್ಯದಲ್ಲಿ ಮುಗಿಯುವ ನಿರೀಕ್ಷೆಯಿದೆ.

## ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/- (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/- ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ**

ತೆರೆದ-ಅಂಚೆ

ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭